## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1999 |
| ಸದಸ್ಯರ ಹೆಸರು | : | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 16-03-2022 |
| ಉತ್ತರಿಸುವ ಸಚಿವರು | : | ಮಾನ್ಯ ಲೋಕೋಪಯೋಗಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು-ಮೈಸೂರು ರಾಷ್ಟ್ರೀಯ ಹೆದ್ದಾರಿಯನ್ನು ದಶ ಪಥದ ರಸ್ತೆಯನ್ನಾಗಿ ಪರಿವರ್ತಿಸಲು ಯೋಜನೆ ರೂಪಿಸಲಾಗಿದೆಯೇ; | ರಾಜ್ಯ ಹೆದ್ದಾರಿ-17 ಅನ್ನು 2014ರಲ್ಲಿ ರಾಷ್ಟ್ರೀಯ ಹೆದ್ದಾರಿ - 275 ಬೆಂಗಳೂರು - ಬಂಟ್ವಾಳ ಸೆಕ್ಷನ್ ಆಗಿ ಘೋಷಿಸಿರುತ್ತಾರೆ. ಪ್ರಸ್ತುತ ಸದರಿ ರಸ್ತೆಯನ್ನು ಭಾರತೀಯ ರಾಷ್ಟ್ರೀಯ ಹೆದ್ದಾರಿ ಅಭಿವೃದ್ಧಿ ಪ್ರಾಧಿಕಾರದವರಿಂದ ನಿರ್ವಹಿಸಲಾಗುತ್ತಿದೆ. ಅವರಿಂದ ಪಡೆದ ವಿವರಗಳು ಈ ಕೆಳಗಿನಂತಿದೆ:<br><br>ರಾಷ್ಟ್ರೀಯ ಹೆದ್ದಾರಿ-275 ಬೆಂಗಳೂರು-ಮೈಸೂರು ರಸ್ತೆಯನ್ನು 6 ಪಥದ ರಸ್ತೆಯನ್ನಾಗಿ ಹಾಗೂ ರಸ್ತೆಯ ಎರಡು ಕಡೆಯೂ 2 ಪಥದ ಸರ್ವೀಸ್ ರಸ್ತೆಯನ್ನು ಒಳಗೊಂಡಂತೆ 10 ಪಥದ ರಸ್ತೆಯನ್ನಾಗಿ ಅಭಿವೃದ್ಧಿಪಡಿಸಲಾಗುತ್ತಿದೆ. |
| ಆ) | ಈ ಯೋಜನೆಯ ರೂಪುರೇಷೆಗಳೇನು; (ಪೂರ್ಣ ವಿವರ ನೀಡುವುದು) | ಬೆಂಗಳೂರು-ಮೈಸೂರು ರಸ್ತೆಯನ್ನು Hybrid Annuity mode ಮಾದರಿಯಲ್ಲಿ ಕಾಮಗಾರಿಯನ್ನು ಪೂರ್ಣಗೊಳಿಸಲು ಗುತ್ತಿಗೆಯನ್ನು ವಹಿಸಿಕೊಡಲಾಗಿರುತ್ತದೆ. ಸದರಿ ಕಾಮಗಾರಿಯನ್ನು ಎರಡು ಪ್ಯಾಕೇಜ್‌ಗಳಲ್ಲಿ ಕೈಗೊಳ್ಳಲಾಗಿರುತ್ತದೆ.<br><br>**ಪ್ಯಾಕೇಜ್ - 1**<br>• ಸೆಕ್ಷನ್ - ಬೆಂಗಳೂರಿನಿಂದ ನಿಡಘಟ್ಟವರೆಗೆ<br>• ಅಭಿವೃದ್ಧಿಯ ಉದ್ದ - 56.20 ಕಿ.ಮೀ<br>• ಕಾಮಗಾರಿಯ ಅನುಮೋದಿತ ಮೊತ್ತ ರೂ.2190.00 ಕೋಟಿ.<br>• ಕಾಮಗಾರಿಯ ಭೂಸ್ವಾಧೀನ ಮೊತ್ತ ರೂ.2036.48 ಕೋಟಿ.<br>• ಕಾಮಗಾರಿಯ ಪ್ರಾರಂಭದ ದಿನಾಂಕ: 14.05.2019<br>• ನಿಗಧಿತ ಮುಕ್ತಾಯದ ದಿನಾಂಕ: 09.11.2021<br>• ಕೋವಿಡ್-19ರ ಕಾರಣ ಅನುಮೋದಿತ ಮುಕ್ತಾಯ ಅವಧಿ-6 ತಿಂಗಳು ವಿಸ್ತರಿಸಲಾಗಿದೆ. ಅದರಂತೆ ಅನುಮೋದಿತ ಮುಕ್ತಾಯ ದಿನಾಂಕ: 02.05.2022<br>• ಪ್ರಸ್ತುತ ಭೌತಿಕ ಪ್ರಗತಿ - ಶೇ. 88%<br>• ಪೂರ್ಣಗೊಳಿಸಲಾದ ಉದ್ದ - 49.00 ಕಿ.ಮೀ.<br>• ಸಿವಿಲ್ ಕಾಮಗಾರಿ ವೆಚ್ಚ ರೂ.875.90 ಕೋಟಿ ಮತ್ತು ಭೂಸ್ವಾಧೀನ ವೆಚ್ಚ ರೂ.2018.75 ಕೋಟಿ.<br><br>**ಪ್ಯಾಕೇಜ್ - 2**<br>• ಸೆಕ್ಷನ್ - ನಿಡಘಟ್ಟದಿಂದ ಮೈಸೂರಿನವರೆಗೆ<br>• ಅಭಿವೃದ್ಧಿಯ ಉದ್ದ - 61.104 ಕಿ.ಮೀ<br>• ಕಾಮಗಾರಿಯ ಅನುಮೋದಿತ ಮೊತ್ತ ರೂ.2283.00 ಕೋಟಿ.<br>• ಕಾಮಗಾರಿಯ ಭೂಸ್ವಾಧೀನ ಮೊತ್ತ ರೂ.1327.33 ಕೋಟಿ. |

| | | |
|---|---|---|
| | | • ಕಾಮಗಾರಿಯ ಪ್ರಾರಂಭದ ದಿನಾಂಕ: 10.12.2019<br>• ನಿಗದಿತ ಮುಕ್ತಾಯದ ದಿನಾಂಕ: 07.06.2022<br>• ಕೋವಿಡ್-19ರ ಕಾರಣ ಅನುಮೋದಿತ ಮುಕ್ತಾಯ ಅವಧಿ-3 ತಿಂಗಳು ವಿಸ್ತರಿಸಲಾಗಿದೆ. ಅದರಂತೆ ಅನುಮೋದಿತ ಮುಕ್ತಾಯ ದಿನಾಂಕ: 07.09.2022<br>• ಪ್ರಸ್ತುತ ಭೌತಿಕ ಪ್ರಗತಿ – ಶೇ. 83%<br>• ಪೂರ್ಣಗೊಳಿಸಲಾದ ಉದ್ದ – 34.00 ಕಿ.ಮೀ.<br>• ಸಿವಿಲ್ ಕಾಮಗಾರಿ ವೆಚ್ಚ ರೂ.882.66 ಕೋಟಿ ಮತ್ತು ಭೂಸ್ವಾಧೀನ ವೆಚ್ಚ ರೂ.1278.13 ಕೋಟಿ. |
| ಇ) | ಕಾಮಗಾರಿ ವಿಳಂಬವಾಗುತ್ತಿದ್ದು, ಇದರಿಂದ ಅಪಘಾತಗಳು ಹೆಚ್ಚಾಗಿ, ಸಾರ್ವಜನಿಕರಿಗೆ ತುಂಬಾ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ ಕಾಮಗಾರಿಯನ್ನು ನಿರ್ವಹಿಸುವಲ್ಲಿ ಯಾವುದೇ ವಿಳಂಬವಾಗಿರುವುದಿಲ್ಲ. ಕಾಮಗಾರಿಯ ಪ್ರಗತಿಯು ಕೋವಿಡ್-19 ಕಾರಣದಿಂದ, ಭೂಸ್ವಾಧೀನ ಪ್ರಕರಣಗಳ ಪ್ರಕ್ರಿಯೆಗಳಿಂದ ಮತ್ತು ಅರಣ್ಯ ಭೂಮಿಯ ತೆರವು ಪ್ರಕರಣಗಳಿಂದ ಕೆಲವು ಕಡೆ ಕುಂಠಿತವಾಗಿರುತ್ತದೆ. ಪ್ರಸ್ತುತ ರಾಜ್ಯ ಸರ್ಕಾರದ ಸಹಕಾರದಿಂದ ಈ ಸಮಸ್ಯೆಗಳು ಹಾಗೂ ಅಡೆತಡೆಗಳು ಪರಿಹಾರಗೊಂಡಿರುತ್ತದೆ.<br><br>ಅಲ್ಲದೆ ರಾಷ್ಟ್ರೀಯ ಹೆದ್ದಾರಿ ನಿಯಮಾವಳಿಯ ಪ್ರಕಾರ ಕಾಮಗಾರಿ ಪ್ರಗತಿಯಲ್ಲಿರುವಾಗ ತೆಗೆದುಕೊಳ್ಳಬೇಕಾದ ಎಲ್ಲಾ ರೀತಿಯ ರಸ್ತೆ ಸುರಕ್ಷತಾ ಕ್ರಮ (Diversion road, Speed Breaker, Thermo plastic painting, Blinker, Signages etc.,) ಗಳನ್ನು ಕೈಗೊಳ್ಳಲಾಗುತ್ತಿದ್ದು, ಈ ಬಗ್ಗೆ ಸಂಬಂಧಿತ ಸೂಪರಿಂಟೆಂಡ್ ಆಫ್ ಪೊಲೀಸ್ ಮತ್ತು ಜಿಲ್ಲಾಧಿಕಾರಿಗಳ ಗಮನವನ್ನು ಸೆಳೆದು ಹೆಚ್ಚಿನ ಸಲಹೆಗಳನ್ನು ಪಡೆಯಲಾಗುತ್ತಿದೆ. |
| ಈ) | ಸದರಿ ಕಾಮಗಾರಿಯನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು? | <u>ಪ್ಯಾಕೇಜ್-1</u><br>ಸೆಕ್ಷನ್ – ಬೆಂಗಳೂರಿನಿಂದ ನಿಡಘಟ್ಟವರೆಗೆ (ಅಭಿವೃದ್ಧಿಯ ಉದ್ದ-56.20 ಕಿ.ಮೀ) ಅನುಮೋದಿತ ಮುಕ್ತಾಯ ದಿನಾಂಕ: 02.05.2022.<br><br><u>ಪ್ಯಾಕೇಜ್-2</u><br>ಸೆಕ್ಷನ್-ನಿಡಘಟ್ಟದಿಂದ ಮೈಸೂರಿನವರೆಗೆ (ಅಭಿವೃದ್ಧಿಯ ಉದ್ದ- 61.104 ಕಿ.ಮೀ) ಅನುಮೋದಿತ ಮುಕ್ತಾಯ ದಿನಾಂಕ: 07.09.2022.<br><br>ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಭೂಸ್ವಾಧೀನ ಪ್ರಕರಣ, ಇತ್ಯಾದಿ ಸಮಸ್ಯೆಗಳ ಬಗ್ಗೆ ಸಭೆಯನ್ನು ನಡೆಸಿ, ಸಮಸ್ಯೆಗಳನ್ನು ಬಗೆಹರಿಸುವ ಬಗ್ಗೆ ಕ್ರಮ ಕೈಗೊಳ್ಳಲಾಗುತ್ತಿದೆ. ಡಿಸೆಂಬರ್-2022ರ ಅಂತ್ಯದೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸಲು ಯೋಜನೆ ರೂಪಿಸಲಾಗಿದ್ದು, ಈ ಕಾಮಗಾರಿಗಳು ತ್ವರಿತಗತಿಯಲ್ಲಿ ಪ್ರಗತಿಯಲ್ಲಿವೆ. |

ಕಡತ ಸಂಖ್ಯೆ: ಲೋಇ 100 ಸಿಎನ್‌ಹೆಚ್ 2022 (ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು